## ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 2066
ಉತ್ತರ ದಿನಾಂಕ : 27.03.2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಗ್ರಾಮೀಣ ಪ್ರದೇಶದಲ್ಲಿ ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಕುಡಿಯುವ ನೀರಿನಲ್ಲಿ ಫ್ಲೋರೈಡ್ ನೈಟ್ರೇಟ್ ಹೆಚ್ಚಿನ ಪ್ರಮಾಣದಲ್ಲಿದ್ದು, ಇದರಿಂದ ಜನರು ಅನಾರೋಗ್ಯಕ್ಕೀಡಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಕುಡಿಯುವ ನೀರಿನಲ್ಲಿರುವ ಮೇಲಿನ ಅಂಶಗಳನ್ನು ಸಂಸ್ಕರಣ ಮಾಡಲು ಸರ್ಕಾರ ಏನು ಕ್ರಮ ಕೈಗೊಂಡಿದೆ; | ನೀರಿನಲ್ಲಿರುವ ನಿಗಧಿತ ಮಟ್ಟಕ್ಕಿಂತ ಹೆಚ್ಚಾಗಿರುವ ಫ್ಲೋರೈಡ್ ಮತ್ತು ನೈಟ್ರೇಟ್ ಅಂಶಗಳನ್ನು ಸಂಸ್ಕರಣೆ ಮಾಡಲು ಈಗಾಗಲೇ ರಾಜ್ಯಾದ್ಯಂತ ಎಲ್ಲಾ 30 ಜಿಲ್ಲೆಗಳಲ್ಲಿ ಒಟ್ಟು 17154 ಶುದ್ಧೀಕರಣ ಘಟಕಗಳನ್ನು ಸ್ಥಾಪಿಸಲಾಗಿರುತ್ತದೆ. ಮೇಲ್ಮೈ ನೀರು (Surface Water) ಲಭ್ಯವಿರುವ ಕಡೆ ಒಟ್ಟು 477 ಬಹುಗ್ರಾಮ ಕುಡಿಯುವ ನೀರಿನ ಯೋಜನೆಗಳಲ್ಲಿ ನೀರಿನ ಶುದ್ಧೀಕರಣ ಸ್ಥಾವರಗಳನ್ನು ಅಳವಡಿಸಿ ಶುದ್ಧೀಕರಿಸಿದ ನೀರನ್ನು ಸರಬರಾಜು ಮಾಡಲಾಗುತ್ತಿದೆ. |
| ಇ. | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಕೇಂದ್ರ ಸರ್ಕಾರದಿಂದ ಗ್ರಾಮೀಣ ಕುಡಿಯುವ ನೀರಿನ ಯೋಜನೆಗೆ ಬಿಡುಗಡೆಯಾದ ಹಣವೆಷ್ಟು; | 2017-18ರಲ್ಲಿ ರೂ.365.81 ಕೋಟಿ<br>2018-19ರಲ್ಲಿ ರೂ.276.06 ಕೋಟಿ<br>2019-20ರಲ್ಲಿ ರೂ.546.05 ಕೋಟಿ<br>**ಒಟ್ಟು ರೂ.1187.92**<br>**(ಒಂದು ಸಾವಿರದ ನೂರ ಎಂಭತ್ತೇಳು ಕೋಟಿ ತೊಂಭತ್ತೆರಡು ಲಕ್ಷ ರೂ.ಗಳು ಮಾತ್ರ)** |
| ಈ. | ಈ ಯೋಜನೆಯಿಂದ ಎಷ್ಟು ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಸ್ಥಾಪಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ 17154 ನೀರು ಶುದ್ಧೀಕರಣ ಘಟಕಗಳನ್ನು ಸ್ಥಾಪಿಸಲಾಗಿದ್ದು, ಜಿಲ್ಲಾವಾರು ವಿವರಗಳನ್ನು **ಅನುಬಂಧ-1**ರಲ್ಲಿ ನೀಡಿದೆ. **(ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಂಚತಂತ್ರದ ದಿನಾಂಕ:13.03.2020ರ ದಾಖಲಾತಿ ಪ್ರಕಾರ)** |
| ಉ. | ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಆರಂಭಿಸದೇ ಇರುವ ಗ್ರಾಮಗಳ ಜಿಲ್ಲಾವಾರು ಮಾಹಿತಿ ನೀಡುವುದು; ಹಾಗೂ ಆರಂಭಿಸದೇ ಇರಲು ಕಾರಣಗಳೇನು? | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ನೀರು ಶುದ್ಧೀಕರಣ ಘಟಕಗಳನ್ನು ಸ್ಥಾಪಿಸಲು ವಿವಿಧ ಹಂತದಲ್ಲಿರುವ ಘಟಕಗಳ ಜಿಲ್ಲಾವಾರು ವಿವರವನ್ನು **ಅನುಬಂಧ-1** ರಲ್ಲಿ ನೀಡಿದೆ. ನಿವೇಶನ ಸಮಸ್ಯೆ, ಕಚ್ಚಾ ನೀರಿನ ಸಮಸ್ಯೆ, ವಿದ್ಯುತ್ ಸಮಸ್ಯೆ ಹಾಗೂ ಗುತ್ತಿಗೆದಾರರ ಸಮಸ್ಯೆಯಿಂದ ಸದರಿ ಘಟಕಗಳನ್ನು ಸ್ಥಾಪಿಸಲು ನಿಧಾನವಾಗಿದ್ದು, ಶೀಘ್ರವಾಗಿ ಸದರಿ ಘಟಕಗಳನ್ನು ಸ್ಥಾಪಿಸಿ, ಸಾರ್ವಜನಿಕರಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸಲು ಕ್ರಮವಹಿಸಲಾಗಿದೆ. |

ಸಂ.ಗ್ರಾಕುನೀ&ನೈಇ/134/ಗ್ರಾನೀಸ(5)/2020

(ಕೆ. ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಅನುಬಂಧ-1

## ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1698 (2066)ರ ಲಗತ್ತು

## ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪಿಸಿರುವ/ ಸ್ಥಾಪನೆಯ ವಿವಿಧ ಹಂತದಲ್ಲಿರುವ ನೀರು ಶುದ್ಧೀಕರಣ ಘಟಕಗಳ ವಿವರ:

| ಕ್ರ.ಸಂ. | ಜಿಲ್ಲೆ | ಸ್ಥಾಪಿಸಿರುವ ಘಟಕಗಳ ಸಂಖ್ಯೆ | ಸ್ಥಾಪನೆಯ ವಿವಿಧ ಹಂತದಲ್ಲಿರುವ ಘಟಕಗಳ ಸಂಖ್ಯೆ |
|---|---|---|---|
| 1 | ಬಾಗಲಕೋಟೆ | 810 | 3 |
| 2 | ಬಳ್ಳಾರಿ | 774 | 0 |
| 3 | ಬೆಳಗಾಂ | 1285 | 1 |
| 4 | ಬೆಂಗಳೂರು(ನ) | 292 | 0 |
| 5 | ಬೆಂಗಳೂರು (ಗ್ರಾ) | 606 | 0 |
| 6 | ಬೀದರ್ | 381 | 17 |
| 7 | ಚಾಮರಾಜನಗರ | 204 | 20 |
| 8 | ಚಿಕ್ಕಬಳ್ಳಾಪುರ | 576 | 0 |
| 9 | ಚಿಕ್ಕಮಗಳೂರು | 215 | 0 |
| 10 | ಚಿತ್ರದುರ್ಗ | 1040 | 2 |
| 11 | ದಕ್ಷಿಣಕನ್ನಡ | 149 | 12 |
| 12 | ದಾವಣಗೆರೆ | 771 | 8 |
| 13 | ಧಾರವಾಡ | 453 | 0 |
| 14 | ಗದಗ | 487 | 0 |
| 15 | ಹಾಸನ | 417 | 0 |
| 16 | ಹಾವೇರಿ | 772 | 14 |
| 17 | ಕಲಬುರಗಿ | 445 | 5 |
| 18 | ಕೊಡಗು | 36 | 0 |
| 19 | ಕೋಲಾರ | 1090 | 0 |
| 20 | ಕೊಪ್ಪಳ | 612 | 50 |
| 21 | ಮಂಡ್ಯ | 751 | 13 |
| 22 | ಮೈಸೂರು | 625 | 0 |
| 23 | ರಾಯಚೂರು | 582 | 8 |
| 24 | ರಾಮನಗರ | 532 | 0 |
| 25 | ಶಿವಮೊಗ್ಗ | 321 | 0 |
| 26 | ತುಮಕೂರು | 1432 | 0 |
| 27 | ಉಡುಪಿ | 59 | 0 |
| 28 | ಉತ್ತರ ಕನ್ನಡ | 243 | 12 |
| 29 | ವಿಜಯಪುರ | 853 | 0 |
| 30 | ಯಾದಗಿರಿ | 341 | 0 |
| ಒಟ್ಟು : | | **17154** | **165** |